ಸದನದಲ್ಲಿ ಉತ್ತರಿಸುವ ಪ್ರಶ್ನೆ

# ಕರ್ನಾಟಕ ವಿಧಾನ ಪರಿಷತ್ತು

ನೂರ ಮೂವತ್ತೆಂಟನೆಯ ಅಧಿವೇಶನ

ಬುಧವಾರ, ದಿನಾಂಕ: 17ನೇ ಜುಲೈ, 2019

ಥಾಮಸ್ ವರದಿಯಂತೆ ಅನುದಾನಿತ ಐ.ಟಿ.ಐ. ಕಾಲೇಜುಗಳ ಸಿಬ್ಬಂದಿಗೆ ಸೌಲಭ್ಯಗಳನ್ನು ನೀಡದಿರುವ ಬಗ್ಗೆ

ಶ್ರೀ ಪುಟ್ಟಣ್ಣ (ಶಿಕ್ಷಕರ ಕ್ಷೇತ್ರ) -

36 (39) ಮುಜರಾಯಿ ಹಾಗೂ ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ಕರ್ನಾಟಕ ರಾಜ್ಯದಲ್ಲಿರುವ ಅನುದಾನಿತ ಐ.ಟಿ.ಐ. ಶಿಕ್ಷಣ ಸಂಸ್ಥೆಗಳ ಸಂಖ್ಯೆ ಎಷ್ಟು ; ಸದರಿ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ನೌಕರರ ಸಂಖ್ಯೆ ಎಷ್ಟು ; (ವಿವರ ನೀಡುವುದು)

(ಆ) ಸದರಿ ನೌಕರರಿಗೆ ಪಿ.ಎಸ್.ಎಸ್. ಥಾಮಸ್ ವರದಿಯ ಶಿಫಾರಸ್ಸಿನ ಅನ್ವಯ ಇತರೆ ಅನುದಾನಿತ ಶಿಕ್ಷಣ ಸಂಸ್ಥೆಗಳ ಸಿಬ್ಬಂದಿಗೆ ಇರುವಂತೆ ಪಿಂಚಣಿ ಗ್ರಾಚ್ಯುಯಿಟಿ ಸೇವಾ ಸೌಲಭ್ಯಗಳು ಮತ್ತು ಸೇವಾ ನಿಯಮಗಳು ಜಾರಿಗೊಳಿಸುವಂತೆ 2014ರಲ್ಲಿ ಸರ್ಕಾರದಿಂದ ಆದೇಶ ಹೊರಡಿಸಲಾಗಿದೆಯೇ;

(ಇ) ಮೇಲೆ ತಿಳಿಸಿರುವ ಆದೇಶದನ್ವಯ ಯಾವ ಸೌಲಭ್ಯಗಳನ್ನು ಅನುಷ್ಠಾನಗೊಳಿಸಲಾಗಿದೆ ; (ವಿವರ ಮತ್ತು ಆದೇಶದ ಪ್ರತಿ ನೀಡುವುದು)

(ಈ) ಇದುವರೆಗೂ ಅನುಷ್ಠಾನಗೊಳಿಸದೇ ಬಾಕಿ ಇರುವ ಸೌಲಭ್ಯಗಳು ಯಾವುವು;

(ಉ) ಇದುವರೆಗೆ ಜಾರಿಗೊಳಿಸದೆ ಇರಲು ಕಾರಣಗಳೇನು ; ಯಾವ ಕಾಲಮಿತಿಯಲ್ಲಿ ಜಾರಿಗೊಳಿಸಲಾಗುತ್ತದೆ ? (ವಿವರ ನೀಡುವುದು)